# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 695
ಉತ್ತರಿಸಬೇಕಾದ ದಿನಾಂಕ : 17.09.2021.

ಸದಸ್ಯರ ಹೆಸರು : ಶ್ರೀ ವಿಜಯ ಸಿಂಗ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ ಚುನಾಯಿತರಾದವರು)
ಉತ್ತರಿಸುವ ಸಚಿವರು : ರೇಷ್ಮೆ, ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯ ಕ್ರೀಡಾಂಗಣ ಮರು ನಿರ್ಮಾಣ ಹಾಗೂ ರಿಪೇರಿ ಕಾಮಗಾರಿಗಳಿಗೆ ಒದಗಿಸಿರುವ ಅನುದಾನವೆಷ್ಟು; ಈ ಕ್ರೀಡಾಂಗಣ ಮರು ನಿರ್ಮಾಣ ಕಾಮಗಾರಿ ನೆನೆಗುದಿಗೆ ಬಿದ್ದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೀದರ್ ನಗರದ ನೆಹರೂ ಕ್ರೀಡಾಂಗಣದ ನಿರ್ಮಾಣಕ್ಕಾಗಿ ರೂ.466.61 ಲಕ್ಷಗಳು ಕಲ್ಯಾಣ-ಕರ್ನಾಟಕ ಪ್ರಾದೇಶಿಕ ಅಭಿವೃದ್ಧಿ ನಿಗಮದ ಮ್ಯಾಕ್ರೋ ಯೋಜನೆಯಡಿ ಮಂಜೂರಾಗಿ, ರೂ. 387.00 ಲಕ್ಷಗಳನ್ನು ನಿರ್ಮಾಣ ಸಂಸ್ಥೆಯಾದ ಪೊಲೀಸ್ ಹೌಸಿಂಗ್ ಕಾರ್ಪೋರೇಷನ್, ಬೀದರ್ ಜಿಲ್ಲೆ ಇವರಿಗೆ ಬಿಡುಗಡೆ ಮಾಡಲಾಗಿರುತ್ತದೆ. ಅಲ್ಲದೇ, ರಾಜ್ಯ ವಲಯದಿಂದ ಬೀದರ್ ಜಿಲ್ಲಾ ಕ್ರೀಡಾಂಗಣದಲ್ಲಿ ಪ್ರೇಕ್ಷಕರ ಗ್ಯಾಲರಿ ನಿರ್ಮಾಣ ಮತ್ತು ಇತರೆ ದುರಸ್ಥಿ ಕಾಮಗಾರಿಗಳನ್ನು ರೂ.100.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡಿ, ಕೆ.ಆರ್.ಐ.ಡಿ.ಎಲ್. ಸಂಸ್ಥೆಗೆ ರೂ.75.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಪ್ರಸ್ತುತ, ಕಾಮಗಾರಿ ಪ್ರಗತಿಯಲ್ಲಿದೆ. |
| ಆ) | ಬಂದಿದ್ದಲ್ಲಿ, ವಿಳಂಬವಾಗಲು ಕಾರಣವೇನು? (ಸಂಪೂರ್ಣ ವಿವರ ನೀಡುವುದು) | ಮಹಾಮಾರಿ ಕೋವಿಡ್-19 ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಎರಡು ಬಾರಿ ಲಾಕ್-ಡೌನ್ ಕಾರಣದಿಂದ ಕಾಮಗಾರಿಯನ್ನು ಪೂರ್ಣಗೊಳಿಸಲು ವಿಳಂಬವಾಗಿರುತ್ತದೆ. |

ವೈಎಸ್‌ಡಿ-ಇಬಿಬಿ/135/2021

(ಡಾ. ನಾರಾಯಣ ಗೌಡ)
ರೇಷ್ಮೆ, ಯುವ ಸಬಲೀಕರಣ ಮತ್ತು
ಕ್ರೀಡಾ ಸಚಿವರು.